ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಚಾಮುಂಡಿ ಬೆಟ್ಟದಲ್ಲಿನ ಚಿರತೆಗಳ ಗಣತಿ ಕುರಿತು

ಶ್ರೀಎಸ್.ನಾಗರಾಜ್(ಸಂದೇಶ್‌ನಾಗರಾಜ್)(ಸ್ಥಳೀಯಸಂಸ್ಥೆಗಳಕ್ಷೇತ್ರ):-

283 (333) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಚಾಮುಂಡಿ ಬೆಟ್ಟದ ಅರಣ್ಯದಲ್ಲಿ ಎಷ್ಟು ಚಿರತೆಗಳಿವೆ ಎಂದು ಅಂದಾಜು ಮಾಡಲಾಗಿದೆ ; ಕಳೆದ ಎರಡು ವರ್ಷದಲ್ಲಿ ಈ ಚಿರತೆಗಳು ಮೈಸೂರು ನಗರಕ್ಕೆ ಮತ್ತು ಸುತ್ತಮುತ್ತಲ ಹಳ್ಳಿಗಳಿಗೆ ನುಗ್ಗಿದ ಪ್ರಕರಣಗಳ ಸಂಖ್ಯೆ ಎಷ್ಟು ;

(ಆ) ಈ ಚಿರತೆಗಳಿಗೆ ಹಾಗೂ ಇತರೆ ಕಾಡು ಪ್ರಾಣಿಗಳಿಗೆ ಕುಡಿಯುವ ನೀರಿನ ಮತ್ತು ಆಹಾರದ ಅಭಾವ ಉಂಟಾಗಿ ಅವು ನಗರ ಮತ್ತು ಹಳ್ಳಿಗಳತ್ತ ನುಗುತ್ತಿದ್ದು, ಚಾಮುಂಡಿ ಬೆಟ್ಟದ ಮೇಲಿರುವ ದೇವಿಕೆರೆ ಹಾಗೂ ಇತರೆ ಕೆರೆ ಕುಂಟೆಗಳಿಗೆ ನೀರು ತುಂಬಿಸಿ ವನ್ಯ ಪ್ರಾಣಿಗಳಿಗೆ ನೀರಿನ ಆಸರೆ ಕಲ್ಪಿಸಲು ಕ್ರಮ ತೆಗೆದುಕೊಳ್ಳಲಾಗುವುದೇ ?